ಸಿ. ಎಸ್. ರಮೇಶ್

# ಮಧುಗಿರಿ ಪಾಳೆಯಗಾರರು : ಇಣುಕುನೋಟ

ವಿಜಯನಗರೋತ್ತರ ಕಾಲದಲ್ಲಿ ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಕೆಲವು ಪಾಳೆಯಗಾರ ಮನೆತನಗಳವರು ಸ್ವತಂತ್ರವಾಗಿ ಆಳ್ವಿಕೆ ಮಾಡುತ್ತಿದ್ದರು. ಅವರಲ್ಲಿ ಕೆಳದಿ ನಾಯಕರು, ಚಿತ್ರದುರ್ಗದ ನಾಯಕರು, ಯಲಹಂಕ ಪ್ರಭುಗಳು, ಕೊಡಗಿನ ಹಾಲೇರಿ ರಾಜರು, ದಕ್ಷಿಣಕನ್ನಡದ ಭೈರರಸರು ಮತ್ತು ಮೈಸೂರಿನ ಒಡೆಯರು ಪ್ರಸಿದ್ಧರು. ಇವರಲ್ಲದೆ ನಿಡುಗಲ್ಲು, ಕಳಲೆ, ಉಮ್ಮತ್ತೂರು, ಮಧುಗಿರಿ, ಮಿಡಿಗೇಶಿ, ಹೊಸಕೋಟೆ, ಗೇರುಸೊಪ್ಪೆ ಮೊದಲಾದ ಅನೇಕ ಸಣ್ಣಪುಟ್ಟ ಪಾಳೆಯಗಾರರೂ ಕೆಲವು ಕಾಲ ತಮ್ಮ ಆಳ್ವಿಕೆ ನಡೆಸಿದರು. ಅಂತಿಮವಾಗಿ, ಹೈದರಾಲಿ ಮತ್ತು ಟಿಪ್ಪುಸುಲ್ತಾನರು ಮೈಸೂರನ್ನು ಪ್ರಬಲ ರಾಜ್ಯವಾಗಿ ಪರಿವರ್ತಿಸಿ, ಎಲ್ಲ ಪಾಳೆಯಗಾರ ಮನೆತನಗಳನ್ನೂ ಕೊನೆಗಾಣಿಸಿದರು. ಪ್ರಸ್ತುತ ಪ್ರಬಂಧದಲ್ಲಿ, ಮಧುಗಿರಿ ಪಾಳೆಯಗಾರರನ್ನು ಕುರಿತ ಕೆಲವು ವಿಚಾರಗಳನ್ನು ಸಂಗ್ರಹಿಸಿದೆ.

ಮಧುಗಿರಿಯು ತುಮಕೂರು ಜಿಲ್ಲೆಯ ಒಂದು ತಾಲ್ಲೂಕು ಕೇಂದ್ರ. ಇದರ ಮೊದಲ ಹೆಸರು ಮದ್ದಗಿರಿ. 'ಮಧು' ಎಂಬ ಹೆಸರಿನ ಎತ್ತರದ ಬುಡದಲ್ಲಿ ಈ ಊರು ಇದ್ದುದರಿಂದ ಮದ್ದಗಿರಿ ಎಂದು ಹೆಸರು ಬಂದಿತಂತೆ. ಇದನ್ನು ದಾಳಿಂಬೆಪಟ್ಟಣವೆಂತಲೂ ಕರೆಯಲಾಗುತ್ತಿದ್ದಿತು. ೧೯೨೭ರಿಂದ ಮಧುಗಿರಿ ಎಂಬ ಹೆಸರು ರೂಢಿಗೆ ಬಂದಿದೆ.

ಮಧುಗಿರಿ ಪಾಳೆಯಗಾರರ ಇತಿಹಾಸ ತಿಳಿಯಲು ಲಭ್ಯವಿರುವ ಆಧಾರಗಳು ಕಡಿಮೆ. ಆದರೆ ಈವರೆಗೆ ಸಿಕ್ಕಿರುವ ಆಧಾರಗಳಲ್ಲಿ, ೧. ಮಿಡಿಗೇಶಿಯ ರಾಯರೇಖಾ, ೨. ಮಿಡಿಗೇಶಿ ಮತ್ತು ಮಧುಗಿರಿಗಳಲ್ಲಿ ಸಿಕ್ಕಿರುವ ದಾಖಲೆಗಳು, ೩. ಶಾಸನಗಳು ಇತ್ಯಾದಿಗಳು ಮಧುಗಿರಿ ಪಾಳೆಯಗಾರ ವಂಶದವರ ಬಗ್ಗೆ ಕೆಲವು ವಿಚಾರಗಳನ್ನು ತಿಳಿಸುತ್ತವೆ. ಆದರೂ ಈ ಪಾಳೆಯಪಟ್ಟಿನ ಚರಿತ್ರೆ ಅಸ್ಪಷ್ಟವಾಗಿದ್ದು, ಇದರ ಬಗ್ಗೆ ಹೆಚ್ಚಿನ ಸಂಶೋಧನೆ ನಡೆಸಬೇಕಾಗಿದೆ.

ದಾಖಲೆಗಳು ತಿಳಿಸುವಂತೆ, ಮಧುಗಿರಿ ಪಾಳೆಯಗಾರರ ಮೂಲವಂಶದವರು ಮೊದಲು ಸೊನ್ನಲಾಪುರ (ಈಗಿನ ಸೊಲ್ಲಾಪುರ)ದಲ್ಲಿ ಇದ್ದು, ಅನಂತರ ದಕ್ಷಿಣಕ್ಕೆ ಬಂದು ವಿಜಯನಗರದ ಅರಸರ ಸೇವೆಗೆ ಸೇರಿದರು. ಈ ಅವಧಿಯಲ್ಲಿ ದೆಹಲಿಯಿಂದ ಬಂದಿದ್ದ ದಾಳಿಕಾರ ಮಲ್ಲಾಖಾನನನ್ನು ಸೋಲಿಸಿ ವಿಜಯನಗರದ ಅರಸರಿಂದ ಆಸ್ಥಾನ ಗೌರವವನ್ನು ಪಡೆದು ಅಶ್ವಾಧಿಕಾರಿಗಳಾದರು. ಈ ಪಾಳೆಗಾರರ ಮೂಲದವನೆಂದರೆ ಆದ್ಯವೀರಪ್ಪಗೌಡ. ಇವನು ಕೋರ ಎಂಬ ಊರನ್ನು ಕಟ್ಟಿಸಿದನು.

ವೀರಪ್ಪಗೌಡನ ನಂತರ ಹಿರೇಗೌಡನು ಪಟ್ಟಕ್ಕೆ ಬಂದನು. ಈತನೇ ಮಧುಗಿರಿ ಪಟ್ಟಣ ಮತ್ತು ಕೋಟೆಗಳನ್ನು ನಿರ್ಮಿಸಿದವನು. ಈತನು ಸುತ್ತಮುತ್ತಲಿನ ರಾಜ್ಯಗಳನ್ನು ಸ್ವಾಧೀನ ಮಾಡಿಕೊಂಡು 'ರಾಜಾ' ಎಂಬ ಬಿರುದನ್ನು ಧರಿಸಿದನು. 'ಮಿಡಗೇಶಿ ಕೈಫಿಯತ್' ಪ್ರಕಾರ ಈತನು ಎರಡನೆಯ ಪಾಳೆಯಗಾರನೆಂದು ತಿಳಿದು ಬಂದರೂ ಈತನೇ ಮಧುಗಿರಿ ಪಾಳೆಯಪಟ್ಟಿನ ಸ್ಥಾಪಕನೆಂದೂ ತಿಳಿದುಬರುತ್ತದೆ. ಈತನ ನಂತರವೇ ವೀರಪ್ಪಗೌಡನು ಪಟ್ಟಕ್ಕೆ ಬಂದನೆಂದು ಕೆಲವರ ಅಭಿಪ್ರಾಯವಿದೆ.

ವೀರಪ್ಪಗೌಡನ ನಂತರ ಆತನ ಮಗ ಕಾಳ ಚಿಕ್ಕಪ್ಪ ಗೌಡ(ಮೂರನೆಯ ಚಿಕ್ಕಪ್ಪಗೌಡ)ನು ಪಟ್ಟಕ್ಕೆ ಬಂದನು. ಈತನು ವಿಜಯನಗರದ ಅರಸನಾಗಿದ್ದ ಶ್ರೀರಂಗರಾಯನ ಅನುಮತಿ ಪಡೆದು ತನ್ನ ಕೋಟೆಯನ್ನು ಮತ್ತಷ್ಟು ಭದ್ರ ಪಡಿಸಿಕೊಂಡನು. ತನ್ನ ರಾಜ್ಯದ ಪ್ರತಿಯೊಂದು ಗ್ರಾಮದ ಗಡಿಗಳನ್ನೂ ನಿರ್ಧರಿಸಿದನು. ಕೆಲವು ಕೆರೆ ಮತ್ತು ದೇವಾಲಯಗಳನ್ನೂ ಕಟ್ಟಿಸಿದನು. ಈತನ ಕಾಲದಲ್ಲಿ ದುರ್ಗಕ್ಕೆ ಮದ್ದಗಿರಿ ಎಂಬ ಹೆಸರಿದ್ದಿತು. ಈತನ ಪ್ರಾಬಲ್ಯವನ್ನು ನಿಜಗಲ್ಲು, ಶಿರಾ ಇವರೇ ಮೊದ ಲಾದ ನೆರೆಹೊರೆಯ ಪಾಳೆಯಗಾರರು ಸಹಿಸಲಿಲ್ಲ. ಕೊರಟಗೆರೆ ನಾಯಕನು ಆರಂಭಿಸಿದ ಯುದ್ಧದಲ್ಲಿ ಚಿಕ್ಕಪ್ಪ ಗೌಡನು ಮೃತನಾದನು. ಈತನ ಮಗ ಮುಮ್ಮಡಿ ಚನ್ನಪ್ಪಗೌಡನಿಂದ ತನ್ನ ತಂದೆಯ ಪ್ರಖ್ಯಾತಿಯನ್ನು ಉಳಿಸಲು ಸಾಧ್ಯವಾಗಲಿಲ್ಲ. ಇವನೊಬ್ಬ ದುರ್ಬಲ ಅರಸ. ಈತನ ಕಾಲದಲ್ಲೇ ಮೈಸೂರಿನ ದಳವಾಯಿ ದೇವರಾಜಯ್ಯನು ಯುದ್ಧವನು ಪ್ರಾರಂಭಿಸಿದನು.

ಮುಮ್ಮಡಿ ಚಿಕ್ಕಪ್ಪಗೌಡನ ನಂತರ ರಂಗೇಗೌಡ, ರಾಮೇಗೌಡ ಮತ್ತು ತಿಮ್ಮೆಗೌಡರು ಆಳ್ವಿಕೆ ಮಾಡಿ ದರು. ಮೈಸೂರಿನ ದಳವಾಯಿ ದೇವರಾಜಯ್ಯನು ಮಧುಗಿರಿ ಪಾಳೆಯಗಾರ ತಿಮ್ಮೇಗೌಡನನ್ನು ಸೋಲಿಸಿ (ಕ್ರಿ.ಶ. ೧೬೭೮) ಶ್ರೀರಂಗಪಟ್ಟಣದ ಸೆರೆಮನೆಗೆ ಕಳುಹಿಸಿದನು. ಕೆಲವು ವರ್ಷಗಳ ನಂತರ ಮೈಸೂರು ಒಡೆಯರು ತಿಮ್ಮೇಗೌಡನನ್ನು ಸೆರೆಮನೆಯಿಂದ ಬಿಡುಗಡೆ ಮಾಡಿ ಮಿಡಿಗೇಶಿಗೆ ಕಳುಹಿಸಿದರು ಹಾಗೂ ಆ ಊರನ್ನೇ ಅವನಿಗೆ ಜಹಗೀರಿಯಾಗಿ ಕೊಟ್ಟರು.

ಹೈದರ್‌ಅಲಿಯು ತನ್ನ ಆಳ್ವಿಕೆ ಪ್ರಾರಂಭಿಸಿದ ಮೇಲೆ ಮೈಸೂರನ್ನು ಪ್ರಬಲ ರಾಜ್ಯವಾಗಿ ಪರಿವರ್ತಿ ಸುವ ಉದ್ದೇಶ ಹೊಂದಿದನು. ಅವನು ಕರ್ನಾಟಕದ ಎಲ್ಲಾ ಪಾಳೆಯಗಾರರನ್ನೂ ಅವಕಾಶ ದೊರೆತಂತೆ ಸೋಲಿಸುತ್ತಾ ಬಂದನು. ಮಧುಗಿರಿ ಪಾಳೆಯಗಾರರೂ ಇದಕ್ಕೆ ಹೊರತಾಗಿರಲಿಲ್ಲ. ಅವನು ಅವರನ್ನು ಹತ್ತಿಕ್ಕಿ ಮಧುಗಿರಿ ಪ್ರಾಂತ್ಯವನ್ನು ಮೈಸೂರು ರಾಜ್ಯಕ್ಕೆ ಸೇರಿಸಿ ಕೊಂಡನು. ಆದರೆ ಕ್ರಿ. ಶ. ೧೭೯೧ರಲ್ಲಿ, ಬ್ರಿಟಿಷರು ಟಿಪ್ಪುವಿನ ಮೇಲೆ ದಾಳಿ ಮಾಡಿದ ಸಂದರ್ಭ ದಲ್ಲಿ, ಮಧುಗಿರಿ ಪಾಳೆಯಗಾರರ ವಂಶಸ್ಥರು ಬ್ರಿಟಿಷರಿಗೆ ಸಹಾಯಮಾಡಿ ತಮ್ಮ ಪಾಳೆಯಪಟ್ಟನ್ನು ಪುನಃ ಪಡೆದುಕೊಳ್ಳಲು ಪ್ರಯತ್ನ ನಡೆಸಿ ವಿಫಲರಾ ದರು.

ಹದಿನಾರು ಮತ್ತು ಹದಿನೆಂಟನೆಯ ಶತಮಾನಗಳ ಅವಧಿಯಲ್ಲಿ ಮಧುಗಿರಿಯ ಸುತ್ತಮುತ್ತಲಿನ ಪ್ರದೇಶ ಗಳಲ್ಲಿ ಆಳ್ವಿಕೆ ನಡೆಸಿದ ಈ ಪಾಳೆಯಗಾರರು ಕರ್ನಾಟಕ ದಲ್ಲಿ ಆಳ್ವಿಕೆ ಮಾಡಿದ ಅನೇಕ ಪಾಳೆಯಗಾರರಲ್ಲಿ ಪ್ರಸಿದ್ಧ ರಾಗಿದ್ದರು. ಇವರ ಆಳ್ವಿಕೆ ಕಾಲದಲ್ಲಿ ಮಿಡಿಗೇಶಿ, ಮಧುಗಿರಿ ಮತ್ತು ಸುತ್ತಮುತ್ತಲಿನ ಪ್ರದೇಶಗಳಲ್ಲಿ ಅನೇಕ ದೇವಾಲಯಗಳೂ ಬಸದಿಗಳೂ ಕೋಟೆ ಕೊತ್ತಲ ಗಳೂ ನಿರ್ಮಾಣವಾದವು. ಹೈದರ್‌ಅಲಿಯು ಸಹಾ ಭಸ್ಮಾಂಗಿ ಎಂಬಲ್ಲಿ ಕಲ್ಲಿನಕೋಟೆಯನ್ನೂ ಅರಮನೆ ಯನ್ನೂ ಕಟ್ಟಿಸಿದನು.

ಈ ಪಾಳೆಯಗಾರರ ಬಗ್ಗೆ ಈವರೆಗೆ ಪ್ರಕಟಗೊಂಡಿ ರುವ ಸಾಹಿತ್ಯವಿದ್ದರೂ ನಿಖರ ಮಾಹಿತಿಯನ್ನೊಳಗೊಂಡ ಅಧಿಕೃತ ಚರಿತ್ರಗ್ರಂಥವನು ಹೊರತರುವ ಅಗತ್ಯ ತೋರು ತ್ತದೆ. ಹಾಗೆಯೇ, ಹೈದರ್‌ಅಲಿಗೂ ಪಾಳೆಯಗಾರರಿಗೂ ಇದ್ದ ಸಂಬಂಧ ಮತ್ತು ಈ ಪಾಳೆಯಗಾರರು ಇಂಗ್ಲೀಷ ರೊಡನೆ ಹೊಂದಿದ್ದ ಸಂಬಂಧಗಳ ಬಗ್ಗೆ ಸಂಶೋಧನೆ ನಡೆಸಲು ಅವಕಾಶವಿದೆ.

ಮಧುಗಿರಿ ತಾಲ್ಲೂಕಿನಲ್ಲಿ ಕೆಲವಾರು ಪ್ರಸಿದ್ಧ ಸ್ಥಳಗಳಿದ್ದು, ಈ ಪಾಳೆಯಗಾರರೊಡನೆ ಚಾರಿತ್ರಿಕ ಸಂಬಂಧ ಪಡೆದಿವೆ. ಉದಾಹರಣೆಗೆ, ಭಸ್ಮಾಂಗಿಯು ಕೋಟೆಯುಳ್ಳ ಒಂದು ಬೆಟ್ಟ. ಹೈದರ್‌ಅಲಿಯು ಇಲ್ಲಿ ಹಿಂದೆ ಬೂದಿಬಸಪ್ಪನು ಕಟ್ಟಿಸಿದ ಮಣ್ಣಿನಕೋಟೆ ಯನ್ನು ಕೆಡವಿಸಿ, ಇಟ್ಟಿಗೆ ಮತ್ತು ಕಲ್ಲಿನಿಂದ ಕೂಡಿದ ಕೋಟೆ ಮತ್ತು ಅರಮನೆಗಳನ್ನು ಕಟ್ಟಿಸಿದನಂತೆ. ಬಿಜ ವರವು ತೋಟದ ಸಿದ್ಧಲಿಂಗಭೂಪಾಲ ಮತ್ತು ಮುಮ್ಮಡಿ ಭೂಪಾಲರೆಂದು ಪ್ರಸಿದ್ಧಿ ಪಡೆದ ದೊರೆಗಳ ಕೇಂದ್ರವಾಗಿದ್ದಿತು. ಏಳುಸುತ್ತಿನಕೋಟೆಯು ಮಧು ಗಿರಿಗೆ ೨೦ ಕಿಲೋಮೀಟರ್ ದೂರದಲ್ಲಿದೆ. ಹಿಂದೆ ಇಲ್ಲಿ ಪಾಂಡವರು ಇದ್ದರೆಂದು ಪ್ರತೀತಿ. ಮಿಡಿಗೇಶಿಯು ಮಧುಗಿರಿ ಪಾಳೆಯಪಟ್ಟಿನ ಕೇಂದ್ರವಾಗಿದ್ದಿತು.

ಸಿದ್ಧಾಪುರದಲ್ಲಿ ಒಂದು ಉತ್ತಮವಾದ ಹಳೆಯ ಕೋಟೆ ಇದೆ. ದೊಡ್ಡದಾಳಿವಟ್ಟದಲ್ಲಿ ಪ್ರಸಿದ್ಧವಾಗಿರುವ ದೊಡ್ಡ ಲಕ್ಷ್ಮೀನರಸಿಂಹ ದೇವಾಲಯವಿದೆ. ಬೆಟ್ಟದ ಬುಡದಲ್ಲಿರುವ ಕುಡುವತ್ತಿಯು ಈಗ ಜನವಸತಿಇಲ್ಲದ ಗ್ರಾಮವೆನಿಸಿದೆ. ಇಲ್ಲಿ ಕಂಬದರಾಯ ದೇವಾಲಯವಿದ್ದು, ಸೊಗಸಾಗಿದೆ. ಜಿರಲೆ ಮಲ್ಲಮ್ಮ ಎಂಬುವಳು ಕಟ್ಟಿಸಿದಳೆಂದು ಹೇಳಲಾಗಿರುವ ಗೋಪಾಲಕೃಷ್ಣ ಮತ್ತು ಲಕ್ಷ್ಮಿ ದೇವಾಲಯಗಳೂ ಮಜ್ಜನದಬಾವಿಯೆಂಬ ಕೊಳವೂ ಇವೆ.